# ಹದಿಹರಯದ
# ಹಾಡುಗಳು

ಅಕ್ಷರ ಕೆ. ವಿ.

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ

HADIHARAYADA HĀDUGALU: (Kannada) A collection of poems in Kannada by Akshara K. V. Post: Honnesara, Sagara; Published by Akshara Prakashana, Sagara-577 401 (Karnataka) Printed at Achchumechchu, Heggodu-577 417 Pages 38; First Impression Dec. 1985

ಬೆಲೆ : ಹನ್ನೆರಡು ರೂಪಾಯಿ

ಈ ಹಾಡುಗಳನ್ನು ಬರೆಸಿದ
ಗೆಳೆಯ ಗೆಳತಿಯರನ್ನು
ಅಜ್ಜಿ ಅಪ್ಪ ಅಮ್ಮಂದಿರನ್ನು
ಮತ್ತು ನೀನಾಸಮ್ ಮಿತ್ರರನ್ನು
ಈ ಪುಟದಲ್ಲಿ ನೆನೆಯದೆ ಇರಲಾರೆ

ಅಕ್ಷರ

ಈ ಎಲ್ಲ ಹಾಡುಗಳನ್ನು ಬರೆದಿದ್ದು 1985 ಜನವರಿ–ಅಕ್ಟೋಬರ್ ನಡುವೆ

# ಹೂವಿನ ಹಾಡು

ದುಂಬಿಯೊಂದು ಹಾರಿಬಂದು
ನನ್ನ ಮೇಲೆ ಕುಳಿತುಕೊಂಡು
ಕುಣಿಸಿ ಕತ್ತು ಉಜ್ಜಿ ಅಂಡು
ಜೇನಸವಿಯ ಕುಡಿದುಕೊಂಡು

ಹೊಸತೊಂದು ಅಂಟುಜಾಡ್ಯ
ಹುಟ್ಟುಹಾಕಿತು
ಹೊರಗಿನೊಂದು ನೆಂಟಸ್ತನ
ಬೆಳೆಸಿಹೋಯಿತು
ಮೊಸೆಯಾಚೆ ದೇಶವೆಲ್ಲ
ಮರೆಸಿಹೋಯಿತು
ಒಂದು ಎರಡು ಮೂರು ಕಣ್ಣು
ತೆರೆಸಿಹೋಯಿತು
ಹಲವಾರು ಇಂಥ ಹಾಡು
ಬರೆಸಿಹೋಯಿತು.



# ಹಾದಿಯ ಹಾಡು

ಒಂದು ದಿನ ಮುಂಜಾನೆ
ಮಂಜಿನ ರಸ್ತೆಯಲಿ
ನನ್ನನ್ನು ನೀ ಕಂಡು
ನಿನ್ನನ್ನು ನಾ ಕಂಡು
ಹಾದಿ ಕಾಣುವವರೆಗೂ
ಕೂಡೇ ಹೋಗೋಣಂತ ನಾನೂ ನೀನೂ
ಒಪ್ಪಂದವಾಗಿದ್ದೆವು

ಹಗಲು ಏರಿದ ಹಾಗೆ
ಬಿಸಿಲಿಗೆ ಮೈಯೊಡ್ಡಿ
ತೆರೆಯುವ ಹೂವಿಗೆ
ಕರೆಯುವ ಎಮ್ಮೆಗೆ
ಇಬ್ಬರೂ ಒಟ್ಟಾಗಿ
ಲಗ್ಗೆ ಹಾಕೋಣಂತ ನಾನೂ ನೀನೂ
ಒಪ್ಪಂದವಾಗಿದ್ದೆವು

ಇಳಿಯುವ ಬೆವರಿಗೆ
ತುಳಿಯುವ ದಾರಿಗೆ
ಕಟ್ಟಡಗಳ ಸಂದಲ್ಲಿ
ವಾಹನಗಳ ಸದ್ದಲ್ಲಿ
ಮನಸು ಮರೆಯದ ಹಾಗೆ
ಕಥೆಯ ಹೇಳೋಣಂತ ನಾನೂ ನೀನೂ
ಒಪ್ಪಂದವಾಗಿದ್ದೆವು

ಊರ ಹೊರಗಿನ ತೋಪ್ರು
ಬಾವೀಯು ಕಟ್ಟೇಲಿ
ಕಣ್ಣು ಕತ್ತಲೆಗಟ್ಟಿ
ಉಣ್ಣಲು ಕೂತಾಗ
ನನ್ನ ನಿನ್ನ ಬುತ್ತಿ
ಕಲಸಿ ತಿನ್ನೋಣಂತ ನಾನೂ ನೀನೂ
ಒಪ್ಪಂದವಾಗಿದ್ದೆವು

ನೆನಪಿನ ಅವಧಿ
ಸವೆದು ಹೋದಮೇಲೆ
ನಡೆಯುವ ಹಾದಿ
ಕವಲೊಡೆದ ಕೂಡಲೆ
ನನ್ಹಾದಿ ನನಗಂತ
ನಿನ್ಹಾದಿ ನಿನಗಂತ ನಾನೂ ನೀನೂ
ಒಪ್ಪಂದವಾಗಿದ್ದೆವು

ಸಂಜೇಯು ಕೆಂಪಿನಲಿ
ಸೂರ್ಯನ ತಂಪಿನಲಿ
ನನಗೊಮ್ಮೆ ನೀನು
ನಿನಗೊಮ್ಮೆ ನಾನು
ನೆನಪು ಆದರೆ ಹಿಡಿದು
ಕನಸು ಕಾಣೋಣಂತ ನಾನೂ ನೀನೂ
ಒಪ್ಪಂದವಾಗಿದ್ದೆವು

ಭೂಗೋಳ ತಿರುತಿರುಗಿ
ಕಾಲವೇ ಕರಕರಗಿ
ಹಾದಿ ಹಾದಿಗೆ ಹೊಕ್ಕು
ಬೀದಿ ಬೀದಿಗೆ ಸಿಕ್ಕು
ಭೂಪಟವೇ ಜಡಕಾಗಿ
ದಿಕ್ಕುಗಳೇ ತೊಡಕಾಗಿ
ತಟ್ಟಂತ ಒಮ್ಮೆ
ನನ್ನನ್ನು ನೀ ಕಂಡು
ನಿನ್ನನ್ನು ನಾ ಕಂಡು
ಗೌಡಬಂಗಾಳಿಯಾದರೆ
ಮುಗುಳುನಗೆ ನಕ್ಕು
ಮುಂದೆ ಹೋಗೋಣಂತ ನಾನೂ ನೀನೂ
ಒಪ್ಪಂದವಾಗಿದ್ದೆವು.

○

# ನೀತಿಯ ಹಾಡು

ಮೊದಲು ಕೇಳುವುದು ಕಥೆ
ಆಮೇಲೆ ಹೇಳುವುದು ನೀತಿ

ಮೊದಲು ಇರುವುದು ರೀತಿ
ಆಮೇಲೆ ಬರುವುದು ನೀತಿ

ಮೊದಲು ಮನುಷ್ಯನೂ ಕೋತಿ
ಆಮೇಲೆ ಕಲಿತದ್ದು ನೀತಿ

ಮೊದಲು ಮಾಡೋಣ ಪ್ರೀತಿ
ಆಮೇಲೆ ನೋಡೋಣ ನೀತಿ



# ಪತ್ರದ ಹಾಡು

ನಿನಗೆ ಬರೆಯುವ ಪತ್ರ
ಹಸಿರು ಅಕ್ಷರ ಹರಿದ ನೀಲಿ ಕಾಗದ ಮಾತ್ರ
ಆಗಬಹುದಾಗಿದ್ದರೆಷ್ಟು ಸುಸೂತ್ರ

ಕಾಗದವೆಂದರೆ ಬರೀ ಕಾಗದವಲ್ಲ
ಕಾಡಿನಲ್ಲಿ ಬೆಳೆದು ಬೊಂಬು
ಲಾರಿಯಲ್ಲಿ ಎಳೆದು ತಂದು
ಕೊಳೆಸಿ ಕೊಳೆಸಿ ಊರಿಗೆಲ್ಲ ಗಬ್ಬು ಹೊಡೆಸಿ
ದೋಸೆ ಹೊಯ್ದಂತೆ ಹೊಯ್ದು ಎತ್ತಬೇಕು
ಎತ್ತಿ ಕತ್ತರಿಸುತ್ತ ಮತ್ತೆ ಸುತ್ತಬೇಕು.

ಅಕ್ಷರವೆಂದರೆ ಬರೀ ಅಕ್ಷರವಲ್ಲ
ಅ ಆ ಇ ಈ ಯಿಂದ ಹಿಡಿದು ಲಕ್ಷಜ್ಞದ ತನಕ
ಡಿಕ್ಷನರಿಯಿಂದ ಹೆಕ್ಕಿ ಹೆಕ್ಕಿ ಎತ್ತಬೇಕು
ಸ್ವರಕ್ಕೆ ವ್ಯಂಜನ ಕೂಡಿ ಪದಕ್ಕೆ ಪ್ರತ್ಯಯ ಕೂಡಿ
ಅರ್ಥಕ್ಕೆ ವ್ಯತ್ಯಯವಾಗದಂತೆ ಬಿತ್ತಬೇಕು
ಪದಕ್ಕೆ ಪದ ಕೂಡಿ ಕನಸು ವಿಗ್ರಹ ಕೆತ್ತಬೇಕು.

ಅದಕ್ಕೇ ಹೇಳುವುದು
ಪತ್ರವೆಂದರೆ ಬರೀ ಪತ್ರವಲ್ಲ
ನೆನಪುಗಳ ಚಿತ್ರವಲ್ಲ, ಹಿಡಿದ ಚಾಮರ ಛತ್ರವಲ್ಲ
ಡಿಕ್ಷನರಿಗೆ ಬಹಳ ಹತ್ತಿರವು ಅಲ್ಲ
ಮಿದುಳು ತಾಕುವ ಎತ್ತರವು ಅಲ್ಲ

ನಿನಗೆ ಬರೆಯುವ ಪತ್ರ
ಹೇಳಬೇಕಾದ್ದು ಹೇಳುವುದು ಮಾತ್ರ
ಆಗಬಹುದಾಗಿದ್ದರೆಷ್ಟು ಸುಸೂತ್ರ.



# ವ್ಯಾಪಾರದ ಹಾಡು

ತಗೋ ನಿನಗಾಗಿಯೇ
ಕಟ್ಟಿ ನಿಲಿಸುತ್ತಲಿದ್ದೇನೆ
ಹಲವು ಅಂತಸ್ತಿನರಮನೆಯ
ನಿನಗಾಗಿಯೇ ನೆಟ್ಟು ಬೆಳೆಸುತ್ತಲಿದ್ದೇನೆ
ಹೂ ಹಣ್ಣು ಬಿಡುವ ಗಿಡಮರವ
ನಿನಗಾಗಿಯೇ ನೆಯ್ದು ಹಾಸುತ್ತಲಿದ್ದೇನೆ
ಕುಸುರಿ ಕಸೂತಿ ಕಪ್ಪು ಕಂಬಳಿಯ
ನಿನಗಾಗಿಯೇ ಬರೆದು ಹಾಡುತ್ತಲಿದ್ದೇನೆ
ನೆನಪುಗಳ ಕೂಡಿ ಕಾದಿಡುವಂಥ ಕಾವ್ಯ ಸವಿಯ.

ಕಟ್ಟುವಾಗೊಂದೊಂದು ಇಟ್ಟಿಗೆಯ ಬಿಟ್ಟಿರಬಹುದು
ಬೆಳೆಸುವಾಗೊಮ್ಮೊಮ್ಮೆ ಕುಡಿ ಬಿಸಿಲು ತಟ್ಟಿರಬಹುದು
ಕಸೂತಿ ಕಂಬಳಿಯಲ್ಲಿ ನವನಕ್ಷೆ ಮೂಡದಿರಬಹುದು
ಬರೆದಿರುವ ಹಾಡಲ್ಲಿ ಪ್ರಾಸ ಆಗಾಗ ಕೂಡದಿರಬಹುದು

ಬೇಕನ್ನಿಸಿದ್ದನ್ನು ತಗೋ
ಬೇಡನ್ನಿಸಿದ್ದನ್ನು ಬಿಡು
ಗಿರಾಕಿ ಬಂದರೆ ಮತ್ತೆ ಹೊಂದಿದರೆ ಕಂಡರಾಯಿತು
ಬಾರದೇ ಇದ್ದರೆ
ಬಾಗಿಲು ಹಾಕಿ ನಾಳೆಗೆ ಕಾದರಾಯಿತು.

ಆದರೆ ನೆನಪಿಟ್ಟುಕೋ—ಇಷ್ಟೆಲ್ಲ ಮಾಡಿದ್ದು ನಿನಗಾಗಿ
ನಿನ್ನ ಅಳತೆ ಅಂತಸ್ತು ಅವಕಾಶ ಅಭಿರುಚಿಗೆ
ಕರಾರುವಾಕ್ಕಾಗಿ.
ಹಲವು ಅಂತಸ್ತಿನರಮನೆ ಕಟ್ಟಿದ್ದು ನಿನಗಾಗಿ
ಕಸೂತಿ ಕಂಬಳಿ ನೆಯ್ದದ್ದು ನಿನಗಾಗಿ
ನೆನಪುಗಳ ಕೂಡಿ ಕಾದಿಡುವ ಈ ಪದ್ಯ ಮಾತ್ರ

ನಿನಗಾಗಿ ಮತ್ತು ನನಗಾಗಿ
ನಾಳೆ ಬರುವ ಎಲ್ಲ ಗಿರಾಕಿಗಾಗಿ.

○

## ಋತುಗಳ ಹಾಡು

ನಾನು ನೀನು ಆ ಹೂದೋಟಕ್ಕೆ ಬಂದಾಗ
ಆಗ ಅದು ಚಳಿಗಾಲ
ಕರಗಿದಿಬ್ಬನಿ ಮಂಜು ಹುಲ್ಲು ಹಾಸಿಗೆ ಹರಡಿ
ಗರಿಗರಿಯು ಪ್ರತ್ಯೇಕ ಮೆರೆಯುತ್ತಿದ್ದಂಥ ಕಾಲ
ನಾವಾಗ ಬಂಡೆಕಲ್ಲಿನ ಮೇಲೆ ಕೂತಿದ್ದೆವು

ನಾನು ನೀನು ಆ ಹೂದೋಟಕ್ಕೆ ಬಂದಾಗ
ಆಗ ಅದು ಮಳೆಗಾಲ
ಸುರಿವ ಮಳೆಗಂಜಿ ಹುಡಿಮಣ್ಣು ಮೆದುವಾಗಿ
ಹೂವುಗಳೆ ತಲೆ ಮರೆಸಿಕೊಂಡಿದ್ದ ಕಾಲ
ನಾವಾಗ ಕೊಡೆಹಿಡಿದು ಓಡಾಡಿದ್ದೆವು

ನಾನು ನೀನು ಆ ಹೂದೋಟಕ್ಕೆ ಬಂದಾಗ
ಆಗ ಅದು ನಡುಬೇಸಿಗೆ
ಮೊಗ್ಗುಮೊಗ್ಗುಗಳಲ್ಲಿ ಉತ್ಸಾಹ ಕಾದಿದ್ದು
ಬಿರಿವ ಮುಹೂರ್ತಕ್ಕೆ ದಾರಿಕಾಯುವ ಕಾಲ
ನಾವಾಗ ನೆಲದ ಮೇಲೇ ಒರಗಿದ್ದೆವು

ಅದಕ್ಕೇ
ಚಳಿಗಾಲದಲ್ಲೇ ಸುಳಿಯುವುದು ನಿನ್ನ ನೆನಪು
ಮಳೆಗಾಲದಲ್ಲೇ ಇಳಿಯುವುದು ನಿನ್ನ ನೆನಪು
ನಿನ್ನ ನೆನಪಿಗೋ ಕಾಯಬೇಕು ನಡುಬೇಸಿಗೆಯ ತನಕ.



# ಗಡಿಬಿಡಿಯ ಹಾಡು

ಒಂದು ಎರಡಾಗಿ ಎರಡು ನಾಲ್ಕಾಗಿ
ನಾಲ್ಕು ಎಂಟು ಹದಿನಾರು ನಲವತ್ತೆಂಟು ಹೀಗೆ
ಒಬ್ಬಂಟಿತನ ಹೆತ್ತು ಹಲಹತ್ತು ಹಳವಂಡವಾಗಿ
ಕಾಡಿ ಮನ ಕದಡುವ ಮೊದಲೆ—
ಕೂಡೋಣ ಬಾ ಒಡನಾಡಿ

ಕುಡಿದ ನೀರೊಳಗಿನಣುಜೀವಿ
ಉದರದೊಳಗೇ ಕೂಡಿ ಮರಿಮಾಡಿ
ಗುಡುಗುಡುಗುಡುಗುಡುವ ಮೊದಲೇ
ಕುಡಿಯೋಣ ಮದ್ದುಮಾಡಿ—
ಕೂಡೋಣ ಬಾ ಒಡನಾಡಿ

ಕನಸಿನಲಿ ಕಂಡ ಕಾಮನೆಗಳೆಲ್ಲ
ನೆನಪಿನಲಿ ಇಳಿದು ಮನೆಮಾಡಿ
ಕಸಗುಡಿಸಿ ಸಂಸಾರ ಹೂಡಿ ಮೊಟ್ಟೆಮರಿ
ಇಡಲು ತೊಡಗುವ ಮೊದಲೆ
ಎಚ್ಚರಾಗೋಣ ಹಠಮಾಡಿ—
ಕೂಡೋಣ ಬಾ ಒಡನಾಡಿ

ಹೊಂಚಿ ಕೂತಂಥ ಸಂಚುಗಾರರ ತಂಡ
ಸದ್ದು ಮಾಡದೇ ಕದ್ದು ಓಡಾಡಿ
ಅಡಿಗಡಿಗೇ ಅಡಗಿ ಬಚ್ಚಿಟ್ಟು ಬಾಂಬು
ಸಿಡಿಸಿ ಕಂಬಿಕೀಳುವ ಮೊದಲೆ
ಹಿಡಿಯೋಣ ನಮ್ಮೊಳಗಿರುವ ಕೇಡಿ—
ಕೂಡೋಣ ಬಾ ಒಡನಾಡಿ

ನನಗೇನೂ ಇರಲಿಲ್ಲ ಇಲ್ಲ ಖಂಡಿತಾ
ಗಡಿಬಿಡಿ
ಆದರೂ ಕಾಲ ಕೆಡುತಿದೆ ನೋಡಿ
ಹಾಗಾಗುವ ಮೊದಲೇ
ಕೂಡೋಣ ಬಾ ಒಡನಾಡಿ
ಕೂಡೋಣ ಬಾ ಒಡನಾಡಿ.

○

# ರೋಗಾನುರೋಗಗಳ ಗದ್ಯಗೀತೆ

ಮೊದಲು ನೀ ಕಣ್ಣಿಗೆ ಕಣ್ಣು ತಾಕಿಸಿದಾಗ
ಮೈಯೆಲ್ಲ ತಣ್ಣಗಾದಂತಾಗಿ ನಾ ಬೆವರಿದ್ದೆ
ಯಾರೊ ಏನೋ ನೀನು ಹೇಗೆ ಇರುವಿಯೋ ಏನೋ
ಯಾವಾಗ ಬಂದು ಯಾವಾಗ ಹೋಗುವಿಯೋ ಅಂತಂದು
ಮನೆಯೊಡೆಯರ ಹಾಗೆ ಅನುಮಾನ ಪಟ್ಟಿದ್ದೆ.
ನಿನ್ನ ಆಗಮನಾರ್ಥ ಹೊಟ್ಟೆ ಹಿಡಿದಾಗೊಮ್ಮೆ
ಮನಸೆಲ್ಲ ಹಿಂಡಿ ಯಾವ ಪಾಪದ ಫಲವೋ ಅಂತ
ಶಪಿಸಿಕೊಂಡಿದ್ದೆ. ಭೂತಕಾಲದ ಗೂಢ
ತಲೆತಲಾಂತರದ ಪೀಡೆ, ಆಕಾಶದಾಚೆಗಿನ
ಕಪುಕುಳಿಗಳ ಹಾರುತಟ್ಟೆ---ಅಂತೇನೇನೋ
ಪದ್ಯ ಕೂಡಾ ಬರೆದಿದ್ದೆ

ನೀನು ನೀನೆಂದೆ ಗೊತ್ತಾದಾಗ
ಬಿಟ್ಟಿದ್ದೆ ಸಮಾಧಾನದ ದೀರ್ಘ ಉಸಿರು
ನಿನಗೂ ಉಂಟು ಒಂದು ಸ್ಪಷ್ಟ ಹೆಸರು
ಗೂಢವೂ ಅಲ್ಲ ಭ್ರೂಣವೂ ಅಲ್ಲ
ಆಕಾಶದಾಚೆಗಿನ ಹಾರುವ ತಟ್ಟೆಯೂ ಅಲ್ಲ
ಇಂಡಿಯಾ ದೇಶದ ನೂರಕ್ಕೆ ತೊಂಬತ್ತು ಹೊಟ್ಟೆಗಳಲ್ಲಿ
ಸಂಸಾರ ಸಾಗಿಸುವ ಸಾಧಾರಣೆ ನೀನು
ಹದಿಹರಯದ ಹತ್ತಕ್ಕೆ ಒಂಬತ್ತು ಎದೆಗಳಲ್ಲಿ
ಹತ್ತಿ ಉರಿಯುವ ಬೀದಿ ದೀಪ ನೀನು
ಹಾಗಂತ ತಿಳಿದು ನಾ ಹತ್ತರಾಗಿದ್ದೆ.

ಅವರೂ ಕಾಡಿದ್ದೀಯ ನೀನು ನನ್ನ,
ರಾತ್ರಿ ನಿದ್ದೆಯಲ್ಲೆಬ್ಬಿಸಿ ನೀರು ಹುಡುಕಿಕೊಂಡು
ಅಲೆಸಿದ್ದೀಯೆ ನೀನು ನನ್ನ,
ಸಿಹಿಖಾರ ಕರಿದತಿಂಡಿಗಳ ದೂರವಾಗಿಸಿ
ಕೆಡಿಸಿದ್ದೀಯೆ ನೀನು ನನ್ನ,
ನಿದ್ದೆಯನ್ನು ಮುರಿದಿದ್ದೀಯೆ, ಊಟವನ್ನು ಮರೆಸಿದ್ದೀಯೆ
ಕನಸು ಮರೀಚಿಕೆಯ ಬೆನ್ನು ಹಿಡಿಸಿದ್ದೀಯೆ
ಆಗಾಗ ತಣಿಸಿದ್ದೀಯೆ, ಒಮ್ಮೊಮ್ಮೆ ದಣಿಸಿದ್ದೀಯೆ
ಮತ್ತೆ ಒಂದೊಂದು ಸಲ ಹುಗಿದಿಟ್ಟ ಭಾವಕಲ್ಮಶಕೊಟ್ಟೆ
ಇಡಿಕಿರಿದ ಹೊಟ್ಟೆ ತೊಳೆದು ಸ್ವಚ್ಛವಾಗಿಸಿ
ಹಗುರಾಗಿಯೇ ಮಾಡಿಕೊಟ್ಟಿದ್ದೀಯೆ.

ಯಾರೋ ಹೇಳಿದರು—ಒಮ್ಮೆ ಬಂದರೆ ನೀನು
ಮತ್ತೆ ಹೋಗುವುದೆ ಇಲ್ಲವಂತೆ, ಬೀಡು ಬಿಟ್ಟಲ್ಲೆ ರಾಜ್ಯ
ಸಾಮ್ರಾಜ್ಯ ಕಟ್ಟಿ ಬೆಳೆಸಿ ತಲೆತಲಾಂತರದ ಇತಿಹಾಸ
ಉಳಿಸುತ್ತೀಯಂತೆ, ಹೊಸಯುಗದ ಹುಟ್ಟಿನವರೆಗೆ
ಹಳಸುತ್ತಲೇ ಹೋಗುತ್ತೀಯಂತೆ
ಹೇಗೂ ಇರಲಿ, ಬದುಕಿದ್ದೇನೆ ನಿನ್ನೊಡನೆ ಹಲವು ವರ್ಷ
ಇರದೇ ಹೋಗಿದ್ದರೆ ಅದೇ ವಿಕೃತವಾಗುತ್ತಿತ್ತು
ಅನ್ನಿಸುವಷ್ಟು ಪ್ರಕೃತ
ನೀನಿರುವುದೇ ನನ್ನ ಸುಕೃತ

ಅದಕ್ಕೇ ಈಗ ಹೆದರುವುದಿಲ್ಲ
ಘಂಟಾಘೋಷವಾಗಿ ಸಾರಿ ಹೇಳುತ್ತೇನೆ ಕೇಳು
ಪದ್ಯವ ಕಟ್ಟಿ ನಿನ್ನ ಪರಾಕು
ಹೊಗಳುತ್ತೇನೆ ತಾಳು—
ಪೂರ್ವ ಜನ್ಮದ ಸುಕೃತ ಪುಣ್ಯಫಲವೋ
ಆದದ್ದೆಲ್ಲ ಒಳಿತೆ ಆಗುವ ಛಲವೋ
ತೊಂಬತ್ತಕ್ಕೆ ಆಗಿದ್ದು ನೂರಕ್ಕೂ
ಆಗಿಯೇಬಿಡುವ ಪ್ರಕೃತಿ ಸಮೂಹದ ಬಲವೋ,
ಬಲದ ಗೆಲುವೋ—

ಅಂತೂ ನನಗೀಗ
ನೀವಿಬ್ಬರೂ ಮಿತ್ರರು—
ಪ್ರೀತಿ
ಮತ್ತು
ಅಮೀಬಿಯಾಸಿಸ್.

○

# ಮೊರುಕಟ್ಟೆಯ ಹಾಡು

೧

ಹೆಕ್ಕಲಾಗದು
ಹೆಕ್ಕಿದರು ಬೇಕಾದ್ದು ಸಿಕ್ಕಲಾರದು

ಪುರಾಣ ಪುಣ್ಯಕಥೆ ಇತಿಹಾಸ ಶೋಧನೆಯು
ಇಟ್ಟ ಇಟ್ಟಿಗೆಯಲ್ಲಿ ಮೆಟ್ಟ ಮೆಟ್ಟಿಲಿನಲ್ಲಿ
ವಿಧವಿಧದ ವಿಗ್ರಹ ಸಾಲಭಂಜಿಕೆ
ತಾಳೆಗರಿ ತಾಮ್ರಪತ್ರದ ಹೊದಿಕೆ
ಕಡೆಗೆ ಜೂಪು ಮೊಂಡು ಹಲವು ರೀತಿಯ
ಬೆಣಚುಕಲ್ಲಿನ ವರೆಗೆ

ಹೆಕ್ಕಲಾಗದು
ಹೆಕ್ಕಿದರು ಬೇಕಾದ್ದು ಸಿಕ್ಕಲಾರದು

ನೋವಿರದೆ ಹಡೆದಂಥ ಯಂತ್ರಮಾನವ
ರೇಡಿಯೋ ವೀಡಿಯೋ ಟೀವಿ ಟೆಲಿಫೋನು
ಕುರ್ಚಿ ಮೇಜು ಕನ್ನಡಕ ಕಂಪ್ಯೂಟರ್ರು
ಕಾರು ಬಸ್ಸು ಟೈರು ಟ್ಯೂಬು
ಕಡೆಗೆ ಥರಥರದ ತಿರುಪುಗಳಿರುವ
ನಟ್ಟುಬೋಲ್ಟಿನ ತನಕ

ಹೆಕ್ಕಲಾಗದು
ಹೆಕ್ಕಿದರು ಬೇಕಾದ್ದು ಸಿಕ್ಕಲಾರದು

ಜ್ಞಾನ ವಿಜ್ಞಾನ ಸೂಕ್ಷ್ಮ ತಂತ್ರಜ್ಞಾನ
ಪಲಪಲವು ಪರ್ಮ ಮಂತ್ರ ಧ್ಯಾನ
ಕೋರ್ಟು ಕಛೇರಿ ರೈಲ್ವೆ ಸ್ಟೇಷನ್ನು
ವ್ಯಾಪಾರ ವ್ಯವಹಾರ ಎಜುಕೇಶನ್ನು
ಕಡೆಗೆ ಕರಕರ ಕಿವಿಕಚ್ಚಿ ಜಗಿಯುವ
ಲಿಪಿ ಶಬ್ದ ಭಾಷೆ ಗೋಜಲು ನಡುವೆ

ಹೆಕ್ಕಲಾಗದು
ಹೆಕ್ಕಿದರು ಬೇಕಾದ್ದು ಸಿಕ್ಕಲಾರದು.

೨

ಅದೇ ಕಡೆಯ ರಾಶಿ
ಬಹುಪಕ್ಷ.

ಎಳೆಬೆಳೆಗು ಮಳೆಹನಿಯು
ಅರಳು ಹೂಗಳ ರಾಶಿ ಅದರೆದುರು
ಸಾಲುಗಟ್ಟಿ ನಿಂತಿರುವ ಹಲವು ಮುಖಗಳು
ಕಣ್ಣು ಹುಬ್ಬು ತುಟಿ ಗಲ್ಲ ಮೂಗು
ಸಿಟ್ಟು ಸೆಡವು ಬೆಡಗು ಬಿನ್ನಾಣ ನಗು
ಥರಥರದಿ ಕಲಸಿ ಬೆರೆಸಿಟ್ಟ ಹಲವಾರು
ರೂಪರೇಖೆಗಳು
ಜೀವ ನಕ್ಷೆಗಳು

ಹೆಕ್ಕಬೇಕು
ಹೆಕ್ಕಿ ಬೇಕಾದ್ದು ಹುಡುಕಬೇಕು

○

# ಬಾವಿಕಟ್ಟೆಯ ಹಾಡು

ಈ ರಸ್ತೆ
ಹಾದು ಹೋಗಿದ್ದೇನೆ ಹಲವು ಸಲ
ಈ ಹೂವು, ಹೌದು ಕಂಡಿದ್ದೇನೆ
ಈ ಬಾವಿಯ ಕಟ್ಟೆ ಅರೆಕ್ಷಣ
ನಿಂತು ಕೂಡಾ ನೋಡಿದ್ದೇನೆ.

ಗೊತ್ತುಂಟು, ಮೂಗಿನ ನೇರಕ್ಕೇ ಮುಂದೆ
ಒಂದು ತಿರುವು. ಜತೆಗೆ ಇಳಿಜಾರು
ಜಾರು ಜಾರು ಮಣ್ಣು ತುಂಬಾ ಕೆಸರು

ಹೋಗುವಾಗೆಲ್ಲ ಇಲ್ಲಿ ಕಾಲಡಿಗೆ
ನೆಲಸರಿದು ಜಾರಿಯೇ ಬಿದ್ದಿದ್ದೇನೆ
ಒಮ್ಮೆ ಅತ್ತಿತ್ತನೋಡಿ ಮಳ್ಳನಗೆ ನಕ್ಕು
ಮುಂದೆ ಹೋಗಿದ್ದೇನೆ.

○

## ಜಾಹೀರಾತಿನ ಹಾಡು

ಎಲ್ಲಿದ್ದರೂ ಬಾ
ಎಲ್ಲಿದ್ದರೂ ಬಾ

ಅಪ್ಪ ಅಮ್ಮ ಊಟಬಿಟ್ಟು
ಕಾದು ಕಾದು ಕುಳಿತಿಲ್ಲ
ಕೆರೆ ಬಾವಿ ಊರು ಕೇರಿ
ಹುಡುಕಿ ಹುಡುಕಿ ಸೋತಿಲ್ಲ

ಬಂಧುಗಳು ಕಾದಿಲ್ಲ
ಕುಟುಂಬಕ್ಕೆ ನೆನಪಿಲ್ಲ

ಪೋಲೀಸಿಗೆ ಕಂಪ್ಲೇಂಟು
ಇಲ್ಲೀತನಕ ಕೊಟ್ಟಿಲ್ಲ
ಕರೆದು ತಂದವರೀಗೆ
ಬಹುಮಾನ ಇಟ್ಟಿಲ್ಲ

ಭಾವಚಿತ್ರ ಹಾಕಲಿಕ್ಕೆ
ಹೇಗಿದ್ದೀಯೆ ಗೊತ್ತಿಲ್ಲ

ಎಲ್ಲಿದ್ದರೂ ಬಾ
ಎಲ್ಲಿದ್ದರೂ ಬಾ



# ಬಂಗಾಲದ ಹಾಡು

ಬಂಗಾಲಿ, ಓ ನನ್ನ ಬಂಗಾಲಿ
ಮಾಡಿದ್ದೆ ನೀ ಗೌಡಬಂಗಾಲಿ

ಕಪ್ಪುಮಣ್ಣಿನ ತುಂಬ, ಬಂಗಾಲಿ ಹಲವಾರು ಕೊಳಗಳು ಬಂಗಾಲಿ
ಒಂದೊಂದು ಕೊಳದೆಡೆಗು, ಬಂಗಾಲಿ ಹಲವಾರು ಕೊಡಗಳು ಬಂಗಾಲಿ
ಒಂದೊಂದು ಕೊಡದೊಡನೆ, ಬಂಗಾಲಿ ಎರಡೆರಡು ಕಣ್ಣುಗಳು ಬಂಗಾಲಿ
ಕಣ್ಣುಗಳ ಜತೆಯಲ್ಲಿ, ಬಂಗಾಲಿ ಕಾಡಿಗೆ ರೆಪ್ಪೆಗಳು

ಬಂಗಾಲಿ, ಓ ನನ್ನ ಬಂಗಾಲಿ
ಮಾಡಿದ್ದೆ ನೀ ಗೌಡಬಂಗಾಲಿ

ಕಲಕತ್ತಾ ರಸ್ತೇಲಿ, ಬಂಗಾಲಿ ಎಳೆಯುವ ರಿಕ್ಷಗಳು ಬಂಗಾಲಿ
ರಸ್ತೆಯ ಮೇಲೆಲ್ಲ, ಬಂಗಾಲಿ ಹರಿಯುವ ಜನಗಳು, ಬಂಗಾಲಿ
ಜನಗಳ ಸಂದಲ್ಲಿ, ಬಂಗಾಲಿ ತೆವಳುವ ಕಾರುಗಳು ಬಂಗಾಲಿ
ಹೋಗಲಾರದೆ ಮುಂದೆ ಬಂಗಾಲಿ ನಿಂತಂಥ ಟ್ರಾಮುಗಳು

ಬಂಗಾಲಿ. ಓ ನನ್ನ ಬಂಗಾಲಿ
ಮಾಡಿದ್ದೆ ನೀ ಗೌಡಬಂಗಾಲಿ

ಮೀಸೆಯಿಲ್ಲದ ಬೋಳು, ಬಂಗಾಲಿ ಮುಖದಲ್ಲಿ ಕಿರುನಗೆ ಬಂಗಾಲಿ
ತಿರುಮುರುಗಾ ಹಾಕಿದ. ಬಂಗಾಲಿ ಸೆರಗಲ್ಲಿ ನೆರಿನೆರಿಗೆ ಬಂಗಾಲಿ
ಅರೆತೋಳು ಜುಬ್ಬಾ, ಬಂಗಾಲಿ ಬಗಲೀಗೆ ಜೋಳಿಗೆ ಬಂಗಾಲಿ
ಜೋಳಿಗೆಯೊಳಗಡೆ, ಬಂಗಾಲಿ ರಸಗುಲ್ಲಾ ಹೋಳಿಗೆ

ಬಂಗಾಲಿ, ಓ ನನ್ನ ಬಂಗಾಲಿ
ಮಾಡಿದ್ದೆ ನೀ ಗೌಡಬಂಗಾಲಿ

ಬಿಳಿಯ ಗೋಡೆಯ ಮೇಲೆ, ಬಂಗಾಲಿ ಸ್ಲೋಗನ್ನು ಚಿತ್ತಾರ ಬಂಗಾಲಿ
ಚಿತ್ತಾರದೊಳಗಡೆ, ಬಂಗಾಲಿ ಅರ್ಥದ ವಿಸ್ತಾರ ಬಂಗಾಲಿ
ಮಾತಿನಲ್ಲಾಗಾಗ, ಬಂಗಾಲಿ ಕಾವ್ಯದ ಉಬ್ಬರ ಬಂಗಾಲಿ
ಕಾವ್ಯದಲ್ಲೊಮ್ಮೊಮ್ಮೆ, ಬಂಗಾಲಿ, ಮಾತಿನ ಅಬ್ಬರ

ಬಂಗಾಲಿ, ಓ ನನ್ನ ಬಂಗಾಲಿ
ಮಾಡಿದ್ದೆ ನೀ ಗೌಡಬಂಗಾಲಿ

ಜಗಳದ ದನಿಯಲ್ಲಿ, ಬಂಗಾಲಿ ಪ್ರೀತಿಯ ಮಾಡುವೆ ಬಂಗಾಲಿ
ಪ್ರೀತಿಯ ಮಾತಲ್ಲಿ, ಬಂಗಾಲಿ ತತ್ವವನೆತ್ತುವೆ ಬಂಗಾಲಿ
ಲೋಕದ ಬೆಳಕಲ್ಲಿ, ಬಂಗಾಲಿ ನಿನ್ನನ್ನೇ ಮರೆಸಿದೆ ಬಂಗಾಲಿ
ನಿನ್ನ ಕಣ್ಣಲಿ ಮಾತ್ರ, ಬಂಗಾಲಿ ಲೋಕವ ಮರೆಸಿದೆ

ಬಂಗಾಲಿ, ಓ ನನ್ನ ಬಂಗಾಲಿ
ಮಾಡಿದ್ದೆ ನೀ ಗೌಡಬಂಗಾಲಿ



# ತಿರುಗಾಟದ ಹಾಡು

ಹಲವು ವೇಷ ಕಟ್ಟಿಕೊಂಡು
ದೇಶ ದೇಶ ಸುತ್ತಾಡಿ
ಹೋದಹೋದಲ್ಲೆಲ್ಲ ಏನು ಕಂಡೆ?
ಬಾಯಿರುಚಿ ಸವುಳಾಗಿ
ವಿಪರೀತ ಸುಸ್ತಾಗಿ
ವಾಪಾಸು ಬರುವಾಗ ಏನು ತಂದೆ ?

ಲಂಡನ್ ಸೇತುವೆ ಕಂಡೆ
ರೋಮನ್ ಕಂಬವ ಕಂಡೆ
ಈಫೆಲ್ ಗೋಪುರದಿಂದ ಪ್ಯಾರಿಸ್ ಕಂಡೆ
ಲಂಡನ್ನಿಂದ ಲೈಟರ್ ತಂದೆ
ಬರ್ಲಿನ್ನಿಂದ ಬ್ಯಾಗು ತಂದೆ
ಸ್ವಿಟ್ಸರ್ಲೆಂಡಿನ ಸೆಂಟು ಕಡಿಮೆ ಸೋಪು ತಂದೆ

ವೆನಿಸ್ ಕಾಲುವೆ ಕಂಡೆ
ಸ್ಪಾನಿಷ್ ಬಂಡೆಯ ಕಂಡೆ
ಇಂಗ್ಲೀಷ್ ಚಾನೆಲ್ಲು ದಾಟಿ ಬಂದೆ
ರೋಮಿನಲ್ಲಿ ಪಿಸ್ಸಾ ತಿಂದೆ
ಡೆನ್ಮಾರ್ಕಿನ ಚೀಸು ತಿಂದೆ
ಐರಿಶ್ ವಿಸ್ಕಿಯು ಬಿಸಿ ಮುಟ್ಟಿ ಬಂದೆ

ಹಲವು ವೇಷ ಕಟ್ಟಿಕೊಂಡು
ದೇಶದೇಶ ಸುತ್ತಾಡಿ
ಹೋದಹೋದಲ್ಲಿ ನನ್ನದೇ ನೆನಪು ಕಂಡೆ
ಬಾಯಿರುಚಿ ಸವುಳಾಗಿ
ವಿಪರೀತ ಸುಸ್ತಾಗಿ
ಉಪ್ಪಿನ ಕಾಯಿ ಊಟದ ಹಸಿವು ತಂದೆ.

○

# ಸುಳ್ಳು ಮತ್ತು ಸತ್ಯದ ಹಾಡು

ನನ್ನ ನಿನ್ನ ಮಾತಿಗೆ
ಸಂಭಾಷಣೆ ಅಂದವನು ಸುಳ್ಳ

ನನ್ನ ನಿನ್ನ ಗುಟ್ಟಿಗೆ
ಗೂಢಾರ್ಥ ಕಟ್ಟಿದವನು ಕಳ್ಳ

ನನ್ನ ನಿನ್ನ ಕಾಗದಕ್ಕೆ
ವ್ಯವಹಾರ ಅಂದವನು ಮಳ್ಳ

ನನ್ನ ನಿನ್ನ ಪ್ರೀತಿಗೆ
ವ್ಯಾಪಾರ ಅನ್ನುವುದು ಸಲ್ಲ

—ಹೀಗಂದವನೇ
ಕಳ್ಳಸುಳ್ಳಮಳ್ಳ ಎಲ್ಲ



## ಕಂಪ್ಯೂಟರ್-ಗೆ

ಹಲವು ಮನಸಿನ ಅರ್ಕ
ಹಲವು ಮಿದುಳಿನ ತರ್ಕ
ಕೂಡಿ ಕುದಿಕುದಿಸಿ ಭಟ್ಟಿಯಿಳಿಸಿದಂಥ
ಮೂಲಧಾತುವಲ್ಲ

ಹಲವು ವಸಂತದ ಚಿಗುರು
ಹಲವು ಬೇಸಿಗೆಯು ಬೆವರು
ಕಂಡುಂಡು ಮೈಯಾಗಿ ಬೆಳೆದಂಥ
ಕಾಲಶಿಶುವಲ್ಲ

ಹಲವು ಊರಲಿ ಬದುಕಿ
ಹಲವು ನೀರನು ಕುಡಿದು
ಜನರೊಡನೆ ಕೂಡಿ ಕುಳಿತಂಥ
ಒಡನಾಡಿಯುಲ್ಲ

ಹಲವು ಗದ್ದೆಯ ಉತ್ತು
ಹಲವು ಮಕ್ಕಳ ಹೆತ್ತು
ಬಂದಂಥ ಬೆಳೆಯಲ್ಲಿ ಬದುಕು ಸಾಗಿಸಿದಂಥ
ಸಾಹಸಿಯು ಅಲ್ಲ

ಕೋರ್ಟು ಕಟ್ಟೆಯ ಹತ್ತಿ
ಕಛೇರಿ ಕಟ್ಟೆಯ ಕಾದು
ಕಾಲಕಾಲಕ್ಕೆ ಅಷ್ಟಿಷ್ಟು ಬಡಿದಾಡಿದಂಥ
ಬರಕೆಯೂ ಅಲ್ಲ

ಪಾಪ, ಹೇಗೆ ಬದುಕುತ್ತೀಯೋ ಕಾಣೆ
ನಮ್ಮಂಥವರ ನಡುವೆ.

ಕ್ಷಣಮಾತ್ರದಲ್ಲಿ ಕೂಡಿ ಕಳೆಯುತ್ತೀಯಂತೆ
ಆಡಿ ಗೆಲ್ಲುತ್ತೀಯಂತೆ
ಭೂತ ಭವಿಷ್ಯಗಳ ಹಿಡಿದಿಟ್ಟು
ನೂರು ಯೋಜನೆಯ ಒಡ್ಡು ಕಟ್ಟುತ್ತೀಯಂತೆ
ಅಪಾಯ ತೋರಿಸುತ್ತೀಯಂತೆ
ಉಪಾಯ ಸೂಚಿಸುತ್ತೀಯಂತೆ
ಹೀಗೆ ಮಾಡಿದರೆ ಹೀಗೆ ಎಂದು
ಅಂಕಿಸಂಕಿಯ ಕೂಡ ಕಾಣಿಸುತ್ತೀಯಂತೆ
ಒಮ್ಮೆ ಉಣಿಸಿಕೊಟ್ಟರೆ ಸಾಕು
ಯಾವತ್ತೂ ಉಳಿಸಿಟ್ಟುಕೊಳ್ಳುತ್ತೀಯಂತೆ
ಕಾಲಕಾಲದವರೆಗೆ ಕಾಲದಾಚೆಯವರೆಗೆ—
ಮಿದುಳ ಅರ್ಕಕ್ಕಿಂತ ಮನದ ತರ್ಕಕ್ಕಿಂತ
ಕಾಲದ ಶಕ್ತಿಗಿಂತ ಬದುಕಿನ ಯುಕ್ತಿಗಿಂತ
ಕಾಣುವ ಎಲ್ಲಕ್ಕಿಂತ
ಅಪ್ರತಿಮ ಪರಾಕ್ರಮಿಯಂತೆ.

ಆದರೂ—
ಪಾಪ ಹೇಗೆ ಬದುಕುತ್ತೀಯೋ ಕಾಣೆ
ನಮ್ಮಂಥವರ ನಡುವೆ.



# ಸೆಪ್ಟೆಂಬರ್ ಇಪ್ಪತ್ತೆಂಟರ ಹಾಡು

ಕಾಲ ಕೂಡಿತ್ತು
ನೆನಪು ಇಪ್ಪ
ತ್ತೆಂಟು ಕಾದಿತ್ತು.

ಉರಿವ ಸುಡುಸುಡು ದೆಹಲಿ ಬೇಸಿಗೆ
ಮುಗಿದು ಉದುರುವ ಎಲೆಯು ಮಾಗಿಗೆ
ಕಾಲಿಡುವ ಸಮಯದಲಿ ಸೆಪ್ಟೆಂ
ಬರಿನ ಇಪ್ಪತ್ತೆಂಟು ಬಂದಿತ್ತು

ಕಾಲ ಕೂಡಿತ್ತು
ನೆನಪು ಇಪ್ಪ
ತ್ತೆಂಟು ಕಾದಿತ್ತು.

ಬಿಸಿಯ ಬೇಗೆಗೆ ಚಳಿಯ ತಂಪನು
ಎರಡು ಹವೆಗಳ ಹದವ ಕೂಡಿಸಿ
ಬಡಿಸುವಂತಹ ಸಮಯ ಸೆಪ್ಟೆಂ
ಬರಿನ ಇಪ್ಪತ್ತೆಂಟು ಬಂದಿತ್ತು.

ಕಾಲ ಕೂಡಿತ್ತು
ನೆನಪು ಇಪ್ಪ
ತ್ತೆಂಟು ಕಾದಿತ್ತು.

ನೆನಪು ಬಿವರಿನ ಮೈಗೆ ಅಂಟಿದ
ಕನಸು ಧೂಳಿಗೆ ಸಿಕ್ಕು ಹೊಲಸಾ
ಗಿದ್ದ ಜೀವಕೆ ತಂಪು ಸೆಪ್ಟೆಂ
ಬರಿನ ಇಪ್ಪತ್ತೆಂಟು ಬಂದಿತ್ತು

ಕಾಲಕೂಡಿತ್ತು
ನೆನಪು ಇಪ್ಪ
ತ್ತೆಂಟು ಕಾದಿತ್ತು.

ದೃಷ್ಟಿ ಮರೆಸುವ ದಟ್ಟ ಮಂಜಿನ
ಹೆಪ್ಪುಗಟ್ಟುವ ಭಾವ ಮೈಮನ
ದಟ್ಟವಾಗುವ ಮುಂಚೆ ಸೆಪ್ಟೆಂ
ಬರಿನ ಇಪ್ಪತ್ತೆಂಟು ಬಾದಿತ್ತು

ಕಾಲಕೂಡಿತ್ತು
ನೆನಪು ಇಪ್ಪ
ತ್ತೆಂಟು ಕಾದಿತ್ತು.

ಬಿಸಿಯು ತಂಪಿನ ಕಾಲ ಪುರುಷನು
ಎರಡು ದಿಕ್ಕಿನ ನನ್ನ ನಿನ್ನನು
ಕೂಡಿಕಳೆಸಿದ ಮನವ ಮರೆಸಿದ
ಯುಗವ ತೆರೆಸಿದ ಬಯಕೆ ತಣಿಸಿದ
ಹದವ ತಿಳಿಸಿದ ಕಾವ್ಯಕಲಿಸಿದ ಸಮಯ ಸೆಪ್ಟೆಂ
ಬರಿನ ಇಪ್ಪತ್ತೆಂಟು ಬಂದಿತ್ತು

ನೆನಪು ಕೂಡಿತ್ತು
ಕನಸು ಇಪ್ಪ
ತ್ತೆಂಟು ಬಿದ್ದಿತ್ತು.

○

## ಹಾಡಿನ ಹಾಡು

ಹದಿಹರಯದಲ್ಲಿ ಎಲ್ಲೆಲ್ಲು ಹಾಡು

ಕಾಡಿನಲ್ಲಿ ಹಾಡು ರೋಡಿನಲ್ಲಿ ಹಾಡು
ನಾಡಿನಲ್ಲಿ ಹಾಡು ನಾಡಿಯಲ್ಲಿ ಹಾಡು

ಹದಿಹರಯದಲ್ಲಿ ಎಲ್ಲೆಲ್ಲು ಹಾಡು

ಕೇಡಿಗೂ ಹಾಡು ಸೇಡಿಗೂ ಹಾಡು
ಬೇಡಲೂ ಹಾಡು ತೋಡಲೂ ಹಾಡು

ಹದಿಹರಯದಲ್ಲಿ ಎಲ್ಲೆಲ್ಲು ಹಾಡು

ಆಡಲಿಕ್ಕೂ ಹಾಡು ನೋಡಲಿಕ್ಕೂ ಹಾಡು
ಕೂಡಲಿಕ್ಕೂ ಹಾಡು ಒಡೆಯಲಿಕ್ಕೂ ಹಾಡು

ಹದಿಹರಯದಲ್ಲಿ ಎಲ್ಲೆಲ್ಲು ಹಾಡು

ಕಾಡಿನೊಳಗೊಂದು ಕಾಡು ರೋಡಿನೊಳಗೊಂದು ರೋಡು
ನಾಡಿನೊಳಗೊಂದು ನಾಡು ಜತೆಗೆ ಮೂಡಿದ್ದರೆ
ಹಾಡಿನೊಳಗೂ ಒಂದು ಹಾಡು

ಹದಿಹರಯದಲ್ಲಿ ಎಲ್ಲೆಲ್ಲು ಹಾಡು



# ಆಟದ ಹಾಡು

ನಾನು ಮತ್ತು ನೀನೆಂದರೆ
ನಾನು ಅಲ್ಲ ನೀನು ಅಲ್ಲ
ನಾನು ನೀನು ಅಷ್ಟೆ ಅಲ್ಲ
ನಡುವೆ ಉಂಟು ಮತ್ತು
ಮತ್ತು ಹಲವು ಹತ್ತು

ನಾನು ಮತ್ತು ನೀನೆಂದರೆ
ನಾನು ಹೌದು ನೀನು ಹೌದು
ನಾನು ನೀನು ಹೌದು ಜತೆಗೆ
ನಡುವೆ ಉಂಟು ಮತ್ತು
ಮತ್ತು ಹಲವು ಹತ್ತು

ನಾನು ಮತ್ತು ನೀನೆಂದರೆ
ನಾನು ಹೌದು ನೀನು ಅಲ್ಲ
ನೀನು ಹೌದು ನಾನು ಅಲ್ಲ
ನಾನು ನೀನು ಹೌದು ಅಲ್ಲ
ನಡುವೆ ಉಂಟು ಮತ್ತು
ಮತ್ತು ಹಲವು ಹತ್ತು



# ಸೋಮಾರಿಯ ಹಾಡು

ಎರಡು ಊಟದ ನಡುವೆ
ಒಂದು ನಿದ್ರೆಯ ಹಾಗೆ
ಎರಡು ನಿದ್ರೆಯ ನಡುವೆ
ಒಂದು ಊಟದ ಹಾಗೆ ನನ್ನ ದಿನಚರಿ

ಪಗಲು ರಾತ್ರಿಯ ನಡುವೆ
ಮುಸ್ಸಂಜೆಯ ಹಾಗೆ
ರಾತ್ರಿ ಪಗಲಿನ ನಡುವೆ
ಮುಂಜಾವಿನ ಹಾಗೆ ನನ್ನ ದಿನಚರಿ

ಎರಡು ಗಡಿಗಳ ನಡುವೆ
ಒಂದು ಬೇಲಿಯ ಹಾಗೆ
ಎರಡು ಬೇಲಿಯ ನಡುವೆ
ಒಂದು ಹೂವಿನ ಹಾಗೆ ನನ್ನ ದಿನಚರಿ

ಎರಡು ಪ್ರೇಮದ ನಡುವೆ
ಒಂದು ಪದ್ಯದ ಹಾಗೆ
ಎರಡು ಪದ್ಯದ ನಡುವೆ
ಒಂದು ಪ್ರೇಮದ ಹಾಗೆ ನನ್ನ ದಿನಚರಿ



## ಸ್ಪರ್ಧೆಯ ಹಾಡು

ಆತ ನಿನ್ನೆದುರು
ಭೂಮಂಡಲವನ್ನೇ ಎತ್ತಿ ಹಿಡಿದ

ಆತ ನಿನ್ನೆದುರು
ನೀಹಾರಿಕೆಯಾಚೆ ಸುತ್ತಿ ಬಂದ

ಆತ ನಿನ್ನೆದುರು
ತಾಳ ಕುಟ್ಟಿ ಕುಟ್ಟಿ ಕುಣಿದ

ಆತ ನಿನ್ನೆದುರು
ಪದ್ಯ ಕಟ್ಟಿ ಕಟ್ಟಿ ಒಗೆದ

ನಾನೇನೂ ಮಾಡಲಿಲ್ಲ
ನಿನ್ನ ನೋಡಿ ನಕ್ಕೆ
ನೀನೂ ತಿರುಗಿ ನಕ್ಕೆ

ಗೆದ್ದವರು ಯಾರು ಗೊತ್ತಿಲ್ಲ
ಸೋತವನಂತೂ ನಾನಲ್ಲ.



# ಅಜ್ಞಾತಪರ್ವದ ಹಾಡು

ಕಂಡಿದ್ದು ಬಲು ಹಿಂದೆ
ಒಂದು ವರುಷದ ಕೆಳಗೆ ಮತ್ತೆ
ನೆನಪಾಗಿದ್ದು ಮೊನ್ನೆ ಮೊನ್ನೆ
ನೀ ಬರೆದ ಪತ್ರದಲ್ಲಿ
ನಾ ಬರೆದ ಚಿತ್ರದಲಿ

ವರುಷ ಹಿಂದಿನ ನೆನಪು
ಮೊಟ್ಟೆ ಕಾವಿಗೆ ಕೂತು
ಬಂದಿತ್ತು ಹೊಸ ಹೊಳಪು
ನಿದ್ದೆಯಿಂದೆದ್ದ ಕಪ್ಪೆಯ ರೂಪು

ನಡುವೆ ನಡೆದಿದ್ದೆಲ್ಲ ಒಳಗೊಳಗೆ
ತರಲೆಬಾರದು ಹೊರಗೆ
ತಂದರದು ಪೇಸಿಗೆ
ಯಾರು ಹೊರಟಿದ್ದು ಎಲ್ಲಿಗೆ
ಮುಟ್ಟಿದ್ದು ಮತ್ತೆಲ್ಲಿಗೆ

ಹಿಂದಿನದು ಯಾವ ಪರ್ವ
ಮುಂದಿನದು ಯಾವ ಪರ್ವ
ಗೊತ್ತಿಲ್ಲ ಕಾಲವೇ ಸರ್ವ
ನಡುವೆ ನಡುನಡುವೆ ಅಜ್ಞಾತಪರ್ವ



# ಸ್ವಾಗತದ ಹಾಡು

ನೀ ಕಾಲು ತಾಕಿಸಿದೊಡನೆಯೇ
ಪ್ರೇಮಕಾವ್ಯದ ಹೊಳೆಯೇ
ತಟ್ಟಂತ ನಿಂತುಹೋಯಿತು

ನೀ ಕಣ್ಣು ಕೂಡಿಸಿದೊಡನೆಯೇ
ನೆನಪು ಕಟ್ಟಿದ ಮನೆಯೇ
ತಟ್ಟಂತ ಉರುಳಿಹೋಯಿತು

ನೀ ನಗೆಯು ಚೆಲ್ಲಿದೊಡನೆಯೇ
ಹೊಗೆಯು ತುಂಬಿದ ತಲೆಯೇ
ತಟ್ಟಂತ ಸ್ವಚ್ಛವಾಯಿತು

ಕಾಯುತ್ತಿದ್ದೇನೆ ಈಗ
ಮೊದಲ ನೋಟದ ಬಳಿಕ ಮಿಲನಕ್ಕಾಗಿ
ಮಿಲನ ಸುಖದ ನೆನಪು ತುಲನಕ್ಕಾಗಿ
ತುಲನವಾಗದೆ ಉಳಿವ ಗೊಂದಲಕ್ಕಾಗಿ
ಬಳಿಕ ಮತ್ತೆ ಇಳಿವ ಪ್ರೇಮಕಾವ್ಯಕ್ಕಾಗಿ

○

## ಬೀಳ್ಕೊಡುಗೆಯ ಹಾಡು

ಹೋಗಿ ಬಾ
ಮುದ್ದು ಪದಿಪರಯ
ಹೋಗಿ ಬಾ

ಬಿರಿದ ಹೂವುಗಳಲ್ಲಿ ಹೋಗಿ ಬಾ
ತೆರೆದ ಎದೆಗಳಲ್ಲಿ ಹೋಗಿ ಬಾ
ಮೊರೆವ ಸಮುದ್ರದಾಚೆ ಹೋಗಿ ಬಾ
ಬರೆದ ಹಾಡುಗಳೊಡನೆ ಹೋಗಿ ಬಾ
ಮುದ್ದು ಪದಿಪರಯ
ಹೋಗಿ ಬಾ

ಕಾದ ಕಾಯಿಗಳಲ್ಲಿ ತಿರುಗಿ ಬಾ
ತಣಿದ ಮೈಯಿಗಳಲ್ಲಿ ಮರಳಿ ಬಾ
ಮಣಿದ ಮಿಾಸೆಗಳಲ್ಲಿ ತಗ್ಗಿ ಬಾ
ಹೆಣೆದ ಕಾವ್ಯಗಳಲ್ಲಿ ಹರಿದು ಬಾ

ಹೋಗಿ ಬಾ
ಮುದ್ದು ಪದಿಪರಯ
ಹೋಗಿ ಬಾ

